ಸೆಪ್ಟೆಂಬರ್ 2016

International Ozone Day

# ಕಾನನ

ನಿಸರ್ಗದೆಡೆಗೆ ಪಯಣ



BANNERUGHATTA

WILDLIFE
CONSERVATION
GROUP

# ಕಾನನ

ನಿಸರ್ಗದೆಡೆಗೆ ಪಯಣ



# ಸೆಪ್ಟೆಂಬರ್ 2016

BANNERUGHATTA

**WILDLIFE CONSERVATION GROUP**



* ಪಾಳು ಅಂಬರಗುಬ್ಬಿ
* ಬೇಲ
* ಐಸ್ ತಂದ ನ್ಯೂಸ್
* ಚಿಗುರಿದ ಸೊಬಗು (ಕವನ)
* ಪ್ರಕೃತಿ ಬಿಂಬ


**ಲೇಖಕ ವೃಂದ**

ಸ್ಮಿತಾ ರಾವ್

ಮಮತ ರಾಮಕೃಷ್ಣ

ಜೈಕುಮಾರ .ಆರ್

ಧನರಾಜ್ .ಎಂ

ಕಾರ್ತಿಕ್ .ಎ .ಕೆ



**ವಿನ್ಯಾಸ**

ಅಶ್ವಥ .ಕೆ.ಎನ್

**ಮುಖಪುಟ ಛಾಯಾಚಿತ್ರ**

ಅಂಕಿತ್ ಚಿಂತಪಲ್ಲಿ

**ಪರಿಷ್ಕರಣೆ**

ಮುರಳಿ .ಎಸ್



# ಪಾಳು ಅಂಬರಗುಬ್ಬಿ

ಕಳೆದ ವಾರ ಶಿರಾಡಿ ಘಾಟಿಯಲ್ಲಿ ಬರುವಾಗ ದಾರಿಯಲ್ಲಿ ಜನಸಂದಣಿ ಇರುವುದನ್ನು ಗಮನಿಸಿ ಇಲ್ಲಿ ಯಾವುದೋ ಪ್ರೇಕ್ಷಣೀಯ ಸ್ಥಳ ಇರಬಹುದೆಂದು ಯೋಚಿಸುತ್ತಿದ್ದಂತೆಯೇ ನಮ್ಮ ಕಾರಿನ ಚಾಲಕ ಅಪ್ಪನಿಗೆ, "ಸಾರ್, ಇಲ್ಲೇ ಮೇಲೆ ಸ್ವಲ್ಪ ಹತ್ತಿ ಹೋದರೆ ಟಿಪ್ಪುಸುಲ್ತಾನನ ಹಳೆ ಕೋಟೆ ಇದೆ. ಟೈಮ್ ಇದ್ದರೆ ನೋಡಿಕೊಂಡು ಬನ್ನಿ" ಅಂದ. ಮೊದಲೇ ಮೈ ಕೈ ಎಲ್ಲಾ ಜಖಂ ಆಗಿದ್ದರಿಂದ ಸ್ವಲ್ಪ ಹೊತ್ತು ತಿರುಗಲು ಹೋಗಬಹುದು ಎಂದು ಖುಷಿಯೂ ಆಯಿತು. ಆ ಕೋಟೆಯ ಹೆಸರೇ ಮಂಜರಾಬಾದ್. ಕೋಟೆ ನೋಡಲು ಬೆಟ್ಟ ಹತ್ತುತ್ತಿದ್ದಂತೆಯೇ ಇಂಥಾ ದಟ್ಟ ಮರಗಳ ಶ್ರೇಣಿಯಲ್ಲೂ ಕೋಟೆಯನ್ನು ನಿರ್ಮಿಸಲು ಸಾಧ್ಯವಾಗಿತ್ತಾ ಎಂದು ಆಶ್ಚರ್ಯವಾಯಿತು. ಮೇಲೆ ಹತ್ತಿ ಬಂದಾಗ ನಕ್ಷತ್ರಾಕಾರದಲ್ಲಿ ನಿರ್ಮಾಣವಾಗಿದ್ದ ಕೋಟೆಯು ಅದ್ಭುತವಾಗಿ ತೋರಿತು. ಅಲ್ಲದೆ ಅಂದು ಕೆಳಗಿನಿಂದ ಬರುತ್ತಿದ್ದ ಶತ್ರು ಪಡೆಯನ್ನು ಪಹರೆ ಕಾಯಲು ಮಾಡಿಸಿದ್ದೆಂದು ಮೂಲೆ ಮೂಲೆಗಳಲ್ಲೂ ನಿರ್ಮಿಸಿದ್ದ ಕಿಂಡಿಗಳಿಂದ ತೋರುತ್ತಿತ್ತು. ಈ ಎತ್ತರದಿಂದ ಅರಬ್ಬೀ ಸಮುದ್ರವೂ ಕಾಣುವುದೆಂದು ಅಲ್ಲಿದ್ದ ಯಾರೋ ಒಬ್ಬರು ಹೇಳಿದಾಗ ಮತ್ತೊಮ್ಮೆ ಆಶ್ಚರ್ಯ ಆಯಿತು.



ಇನ್ನೊಂದು ಕಡೆಯಿಂದ ನೋಡುತ್ತಿದ್ದಂತೆಯೇ ಹಕ್ಕಿಯೊಂದು ಸಣ್ಣ ಕಿಟಕಿಯಿಂದ ಹೊರಗೆ ಹಾರಿ, ಕೋಟೆಯ ಮೇಲ್ಛಾವಣಿ ಮೇಲೆ ಕೂತಿತ್ತು. ಹಾರಿದ್ದು ಕಂಡರೂ ಕೋಟೆಯ ಕಲ್ಲಿನ ಮೇಲೆ ಬಂದು ಕೂತಿದ್ದನ್ನು ಕಾಣಲು ನಿಮಿಷಗಳೇ ಬೇಕಾದವು. ಕಲ್ಲಿನ ಬಣ್ಣವನ್ನೇ ಹೋಲುತ್ತಿದ್ದ ಮಸಿ ಕಂದು ಬಣ್ಣದ ಹಕ್ಕಿಯ ಪುಟ್ಟ ಬಾಲವನ್ನು ನೋಡುತ್ತಿದ್ದಂತಯೇ ಅಂಬರಗುಬ್ಬಿಯಲ್ಲೊಂದು ಅನ್ನೋದು ಖಚಿತವಾಯಿತು ಮತ್ತೆ ಇದು ಯಾವುದೆಂದು ಹುಡುಕಲು ಹೊರಟಾಗ ಇದರ ಹೆಸರು ಪಾಳು ಅಂಬರಗುಬ್ಬಿ (Dusky Crag Martin) ಅನ್ನೋದು ತಿಳಿಯಿತು.



ಇದರ ಹೆಸರೇ ಹೇಳುವಂತೆ ಪಾಳು ಅಂಬರಗುಬ್ಬಿಯು ಪಾಳು ಬಿದ್ದ ಅವಶೇಷಗಳನ್ನು, ಹಳೇ ಕೋಟೆ ಕೊತ್ತಲೆಗಳನ್ನು ತಮ್ಮ ಆವಾಸ ಸ್ಥಾನವಾಗಿ ಮಾಡಿಕೊಂಡಿರುತ್ತದೆ. ಕಂದು ಬಣ್ಣದ ಕಣ್ಣನ್ನು, ಕಪ್ಪು ಕೊಕ್ಕನ್ನೂ ಹೊಂದಿದ, ಅಷ್ಟೇನು ಆಕರ್ಷಕ ಬಣ್ಣ ಹೊಂದಿರದ ಈ ಹಕ್ಕಿ ಭಾರತದಲ್ಲಿ ಹಿಮಾಲಯದಿಂದ ದಕ್ಷಿಣದ ನೀಲಗಿರಿಯವರೆಗೂ ಕಾಣಸಿಗುತ್ತದೆ. ಗಾತ್ರದಲ್ಲಿ ಇತರ ಅಂಬರಗುಬ್ಬಿಗಳಿಗಿಂತ ಚಿಕ್ಕದಾಗಿದ್ದು, ಬಾಲದ ತುದಿಗೆ ಬಿಳಿ ಚುಕ್ಕೆಗಳಿವೆ. ಹಾರುವ ಕೀಟಗಳನ್ನು ಒಮ್ಮೆಗೇ ತಿಂದು, ಆಗಸದಲ್ಲೇ ತಮ್ಮ ಭೋಜನವನ್ನು ಮುಗಿಸುತ್ತದೆ. ಇನ್ನು ಇವುಗಳು ಹಲವು ಬಾವಲಿಗಳಿಗೆ ಆಹಾರವಾಗಿದ್ದುದೂ ದಾಖಲಾಗಿದೆ. ಸಾಮಾನ್ಯವಾಗಿ ಜೂನ್ ನಿಂದ ಅಕ್ಟೋಬರ್ ವರೆಗೆ, ಮಣ್ಣಿನಿಂದ ಅರ್ಧ ಬಟ್ಟಲಿನಾಕಾರದಲ್ಲಿ ಕೋಟೆಯಂತಹ ಅವಶೇಷಗಳ ಸಂದುಗಳಲ್ಲಿ ಗೂಡು ಕಟ್ಟುತ್ತವೆ. ಐದಾರು ಸಾವಿರ ಅಡಿ ಎತ್ತರದ ಪ್ರದೇಶದಲ್ಲಿಯೂ ಇವು ಗೂಡು ಕಟ್ಟಬಲ್ಲವು. ನಂತರ ಗಂಡು ಹೆಣ್ಣುಗಳೆರಡೂ ಮರಿಗಳ ಆರೈಕೆಯಲ್ಲಿ ಸಕ್ರಿಯವಾಗಿ ತೊಡಗುತ್ತವೆ. ಅದೇ ಗೂಡನ್ನು ಮತ್ತೆ ಮುಂದಿನ ವರ್ಷಕ್ಕೆ ಉಪಯೋಗಿಸುವುದು ಸಹ ಕಂಡುಬಂದಿದೆ.

ಹೀಗೆ ಕೋಟೆಯನ್ನೊಂದು ಸುತ್ತು ಹಾಕಿ ಇದನ್ನು ಕಟ್ಟಿದ ಬಗೆಗೆ ಮೆಚ್ಚುಗೆ ವ್ಯಕ್ತಪಡಿಸುತ್ತಾ, ಅಂಬರಗುಬ್ಬಿಯ ಇಂಚರ ಕೇಳುತ್ತಾ ಖುಷಿಯಿಂದ ಹೊರಬರುತ್ತಲೇ ಎಲ್ಲೆಂದರಲ್ಲಿ ಬಿದ್ದಿದ್ದ ಪ್ಲಾಸ್ಟಿಕ್ ಚೀಲಗಳೂ, ಬಾಟಲ್ಗಳನ್ನು ಕಂಡು ಅದನ್ನು ಬಿಸಾಕಿ ಹೋದ ಪ್ರಜ್ಞಾಹೀನರನ್ನು ಮನಸ್ಸು ಕೊನೆಗೆ ಒಮ್ಮೆ ಶಪಿಸುವಂತಾಯಿತು.

- ಸ್ಮಿತಾ ರಾವ್
ಶಿವಮೊಗ್ಗ





# ಬೇಲ

### ವೈಜ್ಞಾನಿಕ ಹೆಸರು: ಲಿಮೋನಿಯ ಅಸೀಡಿಸ್ಸಿಮ

### ಇಂಗ್ಲೀಷ್ ಹೆಸರು: ವುಡ್ ಆಪಲ್

ಬೇಲದ ಮರಗಳು ಭಾರತದ ಸ್ಥಳಿಯ ಮರವಾಗಿದ್ದು, ಥೈಲ್ಯಾಂಡ್, ಮಲೇಶಿಯಾ, ಕಂಬೋಡಿಯ ಮತ್ತು ಏಷ್ಯಾದ ಆಗ್ನೇಯ ಭಾಗಗಳಲ್ಲಿ ಹೆಚ್ಚಾಗಿ ಹಂಚಿಕೆಯಾಗಿದೆ. ನಮ್ಮ ಕರ್ನಾಟಕ ರಾಜ್ಯದ ಶುಷ್ಕ, ಅರೆ-ಶುಷ್ಕ ಮತ್ತು ಎಲೆ ಉದುರುವ ಕಾಡುಗಳಲ್ಲಿಯೂ ಕಂಡು ಬರುತ್ತದೆ.

ಬೇಲದ ಮರ ಸುಮಾರು ಎಂಟು ಮೀಟರ್ ಮೀರಿ ಬೆಳೆಯುವುದು, ಇದರ ತೊಗಟೆ ಒರಟಾಗಿದ್ದು ಲಂಬವಾದ ಬಿರುಕುಗಳನ್ನು ಹೊಂದಿರುತ್ತದೆ. ಬೇಲದ ಸಂಯುಕ್ತ ಎಲೆಗಳು ಎರಡು-ಮೂರು ಜೋಡಿಗಳಾಗಿ ಸಣ್ಣ ಎಲೆಗಳನ್ನು ಹೊಂದಿರುತ್ತವೆ. ಚಿಗುರಿದಾಗ ತಿಳಿಹಸಿರು ಬಣ್ಣವಿದ್ದು ಬೆಳೆಯುತ್ತ ಗಾಡ ಹಸಿರು ಮೂಡುತ್ತವೆ, ಎಲೆ ಗೊಂಚಿನ ತೊಟ್ಟುಗಳ ಕೆಳಗೆ ಚೂಪಾದ ಮುಳ್ಳುಗಳು ಮೂಡುತ್ತವೆ. ಎಲೆಗಳನ್ನು ತಿಕ್ಕಿದಾಗ ನಿಂಬೆಯ ಪರಿಮಳ ಬೀರುತ್ತವೆ. ವಸಂತ ಋತುವಿನ ಕೊನೆಯಲ್ಲಿ ಬಿಳಿ, ತಿಳಿಹಸಿರು, ಕೆಂಪು ಮಿಶ್ರ ಬಣ್ಣಗಳಿಂದ ರಾತ್ರಿಯ ಆಕಾಶದ ನಕ್ಷತ್ರಗಳ ಆಕಾರದಂತೆ ಇದರ ಹೂಗಳು ಮೂಡುತ್ತದೆ.

ಸುಗ್ಗಿಯ ಕಾಲದಲ್ಲಿ ಬಿಡುವ ಬೇಲದ ಹಣ್ಣುಗಳು ನೋಡಲು ಗಟ್ಟಿಯಾದ ತೊಗಟೆಯನ್ನು ಹೊಂದಿದ್ದು ಅದರೊಳಗೆ ಚಿಕ್ಕ ಚಿಕ್ಕ ಬೀಜಗಳನ್ನೊಳಗೊಂಡ ಪರಿಮಳಯುಕ್ತ ತಿರುಳು ಇರುತ್ತದೆ. ಬೇಲದ ಮರ, ಬಿಲ್ವದ ಮರದಂತೆಯೇ ಎಲೆ, ಹೂವು ಮತ್ತು ಹಣ್ಣುಗಳನ್ನು ಹೋಲುವುದು, ಬಿಲ್ವದ ಹೂವುಗಳು ಬೇಲದ ಹೂವುಗಳಂತೆ ಆಕಾರದಲ್ಲಿ ಒಂದೇ ಆದರೂ ಬಣ್ಣದಲ್ಲಿ ಪ್ರತ್ಯೇಕ.

ಸಾಮಾನ್ಯವಾಗಿ ಜನರು ಬಿಲ್ವ ಮತ್ತು ಬೇಲದ ಹಣ್ಣುಗಳನ್ನು ನೋಡಿ ಗೊಂದಲಗೊಳಗಾಗುವುದುಂಟು, ಹಾಗೆಯೇ ಸೂಕ್ಷ್ಮವಾಗಿ ಗಮನಿಸಿದಾಗ ಬೇಲದ ಹಣ್ಣು ಒರಟಾದ ಬಿಳಿಯ ಬಣ್ಣ ಹೊಂದಿದ್ದು, ಬಿಲ್ವವು ನಯವಾದ ಹಸಿರು ಬಣ್ಣದಿಂದ ಕೂಡಿರುತ್ತದೆ.



ಬೇಲದಲ್ಲಿ ಹಣ್ಣು ಮತ್ತು ರುಚಿಯನ್ನಾಧರಿಸಿ ಎರಡು ಬಗೆಗಳಾನ್ನಾಗಿ ಗುರುತಿಸಬಹುದು, ಒಂದು ಗಾತ್ರದಲ್ಲಿ ದೊಡ್ಡದಾಗಿದ್ದು ಸವಿಯಲು ಸಿಹಿಯಾಗಿರುತ್ತದೆ, ಮತ್ತೊಂದು ಸಣ್ಣದಾಗಿದ್ದು ರುಚಿಯಲ್ಲಿ ಸ್ವಲ್ಪ ಹುಳಿಯಾಗಿರುತ್ತದೆ.

ಬೇಲದ ಮರವು ಬಹಳ ಔಷಧಿಯ ಗುಣಗಳನ್ನು ಒಳಗೊಂಡಿದ್ದು ಅಜೀರ್ಣ, ಅತಿಸಾರ, ಭೇದಿ, ಮೂಲವ್ಯಾಧಿ, ಲಿವರ್ ಮತ್ತು ಕರುಳಿನ ಸಂಬಂಧಿತ ರೋಗಗಳನ್ನು ಗುಣಪಡಿಸಲು ನೆರವಾಗುವುದು. ಅದಲ್ಲದೇ ಗೃಹಬಳಕೆ ಮತ್ತು ವ್ಯವಸಾಯದಲ್ಲಿನ ಉಪಕರಣಗಳ ತಯಾರಿಕೆಯಲ್ಲಿ ಮತ್ತು ಬೇಲದ ಗೊಂದುವಿನಿಂದ ಬಣ್ಣಗಳನ್ನು ತಯಾರಿಸಲು ಬಳಸಲಾಗುವುದು.

ಉಲ್ಲೇಖಗಳು :


1. ಕರ್ನಾಟಕದ ಸಾಮಾನ್ಯ ಒಣಭೂಮಿ ಮರಗಳು - ಪುಸ್ತಕ, Atree ಬೆಂಗಳೂರು.
2. ದಿ ಅರ್ಥ್ ಆಫ್ ಇಂಡಿಯಾ - ಅಂತರ್ ಜಾಲ.
3. ಡಿಜಿಟಲ್ ಫ್ಲೋರ ಆಫ್ ಕರ್ನಾಟಕ - ಭಾರತೀಯ ವಿಜ್ಞಾನ ಸಂಸ್ಥೆ.
4. Wood Apple- ವಿಕಿಪಿಡಿಯಾ




- ಮಮತ ರಾಮಕೃಷ್ಣ





# ಐಸ್ ತಂದ ನ್ಯೂಸ್

"ಐಸಪ್ರ್ಯೋ... ಐಸ್ಸು...ಪಾಮ್..ಪಾಮ್" ಅನ್ನೋ ಧ್ವನಿ ಕೇಳ್ತಿದ್ದ ಹಾಗೆ ಮೊದಲು ನನಗೆ ನೆನಪಾಗೋದು ನನ್ನ ಬಾಲ್ಯ ದಿನಗಳ ಆ ರೂಪಾಯಿ ಐಸಿಗೆ ನಾನು ಕೂಡಿಟ್ಟ ಎಲ್ಲಾ ಬಾಟಲಿಗಳು, ಮತ್ತೆ ಹಣ ಸಾಲದಿದ್ದರೆ ಅಮ್ಮನ ಬಳಿ ಬೇಡಿದ ಕ್ಷಣಗಳು. ನಿಮಗೂ ಆ ತರಹದ ನೆನಪುಗಳಿರಬಹುದು. ಅವೆಲ್ಲ ಈಗ ನೆನೆಸಿಕೊಂಡರೆ ಏನೋ ಖುಷಿ. ಆ ಕಲರ್ ಕಲರ್ ಐಸುಗಳು, ಸೋರದ ಹಾಗೆ ಅವುಗಳನ್ನು ಲೋಟದೊಳಗೆ ಇಟ್ಟು ತಿನ್ನುತ್ತಿದ್ದುದು. ಅಹ್! ಆ ಮಜಾವೇ ಬೇರೆ. ಆದರೆ ಈಗಿನ ದಿನಗಳಲ್ಲಿ ಅವೆಲ್ಲ ಕಾಣಸಿಗುವುದು ಬಹಳ ವಿರಳ. ಅದೆಲ್ಲ ಇರಲಿ ಬಿಡಿ, ಈಗ ಆ ಐಸಿನ ಸುದ್ದಿ ಏತಕ್ಕೆ ಬಂತು ಅಂದ್ರೆ ಆರ್ಕಟಿಕ್ ನಲ್ಲಿರುವ ಐಸು (ಹಿಮ) ನಮಗೆ ನ್ಯೂಸ್(ಸುದ್ದಿ) ಹೊತ್ತು ತರುತ್ತಿದ್ದಾವಂತೆ. ಏನದು ಸುದ್ದಿ ? ಮುಂದೆ ಓದಿ...

ಮನುಷ್ಯ ಏನೇ ಮಾಡದಿದ್ದರೂ ಇಲ್ಲಿಯವರೆಗೆ ಸರಿಯಾಗಿ ಚಾಚೂ ತಪ್ಪದೆ ಮಾಡಿಕೊಂಡು ಬರುತ್ತಿರುವುದು ಎರಡು. ಒಂದು ಜನಸಂಖ್ಯಾ ವೃದ್ಧಿ, ಮತ್ತು ವಾತಾವರಣ ಬದಲಾವಣೆ (ಒಳ್ಳೆ ರೀತಿಯದ್ದಲ್ಲ) ಈ ವಿಷಯವನ್ನು ಈಗಾಗಲೇ "ನಿಸರ್ಗ ದೇವಿ" ಶಾಂತವಾಗಿ ಹಾಗು ಉಗ್ರವಾಗಿಯೂ ಬೇರೆ ಬೇರೆ ರೂಪದಲ್ಲಿ ಹೇಳಿದ್ದಾಳೆ ಹಾಗೂ ಹೇಳುತ್ತಲೇ ಇದ್ದಾಳೆ. ಈಗ ಅವಳ ಕಿಂಕರ "ಹಿಮ ಗಡ್ಡೆ".



*'ರಾಬರ್ಟ್ ನ್ಯೂಟನ್'* ಒಬ್ಬ ಕೊಲಂಬಿಯಾ ವಿಶ್ವವಿದ್ಯಾಲಯದಲ್ಲಿ "ಸಮುದ್ರಶಾಸ್ತ್ರಜ್ಞ" ಇವರು ಮತ್ತು ಇವರ ಸಂಗಡಿಗರು ನಡೆಸಿದ ಇತ್ತೀಚಿನ ಸಂಶೋಧನೆ ಪ್ರಕಾರ ಆರ್ಕಟಿಕ್ನಲ್ಲಿನ ಮಂಜುಗಡ್ಡೆಗಳು ವಾತಾವರಣದಲ್ಲಿನ ಮಾಲಿನ್ಯವನ್ನು ಬೇರೆಬೇರೆ ಕಡೆ ಹೊತ್ತೊಯ್ಯುತ್ತಿದೆಯಂತೆ. ಹೌದು, ಜಾಗತಿಕ ತಾಪಮಾನದ(Global Warming)ಋಜುವಾತಾಗಿ ನಮ್ಮ ಭೂಮಿಯ ಧ್ರುವಗಳ ಮಂಜುಗಡ್ಡೆಗಳು ಕರಗುತ್ತಿರುವುದು ನಿಮಗೀಗಲೇತಿಳಿದಿದೆ. ಆದರೆ ಈ ಹೊಸ ಸಂಶೋಧನೆಯಲ್ಲಿ ಅವು ಬೇರೆಬೇರೆ ಪ್ರದೇಶದ ಮಾಲಿನ್ಯವನ್ನು ಮತ್ತೊಂದು ಪ್ರದೇಶಕ್ಕೆ ಪರಿಚಯಿಸುತ್ತಿದೆ ಎಂಬುದು "ತಾಜಾ ಸುದ್ದಿ". ಅದು ಹೇಗೆ? ಸ್ವಲ್ಪ ಮುಂದೆ ಓದಿ...



ಕಡಿಮೆ ಎತ್ತರದ ಗಾಳಿಯು (Lower Altitude Wind) ಸಮುದ್ರತೀರದಲ್ಲಿನ ಕಾರ್ಖಾನೆಗಳ ಮಾಲಿನ್ಯವನ್ನು ಕೊಂಡೊಯ್ದು, ಚಳಿಗಾಲದಲ್ಲಿ ಹುಟ್ಟುವ ಮಂಜುಗಡ್ಡೆಗಳ ಜೊತೆ ಸೇರಿಸಿಬಿಡುತ್ತವೆ. ಇವು ಮತ್ತೆ ಬೇಸಿಗೆಯಲ್ಲಿ ಕರಗುತ್ತವೆ. ಆದರೆ ಈ ಎರಡು ಕಾಲಗಳ ಮಧ್ಯದ ಸಮಯದಲ್ಲಿಯೇ ಅವು ಬೇರೆ ಪ್ರದೇಶಗಳಿಗೆ ವಲಸೆ ಹೋಗಿಬಿಟ್ಟಿರುತ್ತವೆ. ಅದು ಹೇಗೆ ಸಾಧ್ಯ? ಎಂಬ ಪ್ರಶ್ನೆ ಕಾಡುವುದು ಸಹಜ. ಮೊದಲೇ ಹೇಳಿದ ಹಾಗೆ ಜಾಗತಿಕ ತಾಪಮಾನದ ಸಲುವಾಗಿ ಮಂಜುಗಡ್ಡೆ ಕರಗಿ ಬಿಡಿಯಾಗಿ ಸಮುದ್ರ ಸೇರುತ್ತವೆ. ಅಂತಹ ಮಂಜುಗೆಡ್ಡೆಗಳು ಸಮುದ್ರದ ಜಾಡೇ ಹಿಡಿದು ದೂರ ಕ್ರಮಿಸುತ್ತವೆ. ಆದರೆ ಈ ದೂರಗಳು ಕೇವಲ 100ಕಿಮೀ ಇರುತ್ತವೆ. ಆದರೆ ಚಳಿಗಾಲದಲ್ಲಿ ಹೊಸದಾಗಿ ಹುಟ್ಟುವ ಮಂಜುಗಡ್ಡೆಗಳು ಹಳೆಯ ಆರ್ಕಟಿಕ್ ಮಂಜುಗಡ್ಡೆಗಳಿಗಿಂತ 8-10% ವೇಗವಾಗಿ ಚಲಿಸುತ್ತವೆ ಎಂಬುದು ಹೊಸ ಸಂಶೋಧನೆ. ಅದರ ಪ್ರಕಾರ ಈ ಹೊಸ ಮಂಜುಗಡ್ಡೆಗಳು ಕೆಲವು ಸಾವಿರ ಕಿಮೀಗಳು ಚಲಿಸುತ್ತವೆಯಂತೆ. ಹೀಗಾಗಿ "ಚಲಿಸುವ ಮಂಜುಗಡ್ಡೆಗಳು ತೊಂದರೆದಾಯಕ" ಎನ್ನುತ್ತಾರೆ ನ್ಯೂಟನ್, ಏಕೆಂದರೆ ಈ ತರಹದ ಚಲನೆಯಿಂದಾಗಿ ಕೆಲವು "**ಪರಿಸರ ದುರಂತದ**" (Environmental

disaster)ಗಳಂತಹ “**ತೈಲ ಸೋರಿಕೆ**”(Oil spill)ಗಳನ್ನೂ ಹೊತ್ತೊಯ್ದು, ಬೇರೆ ಪ್ರದೇಶದಲ್ಲಿ ಉಪದ್ರವ ಸಂಭವಿಸಬಹುದು, ಅಲ್ಲವೇ?.

ಅಂದಹಾಗೆ ಎಲ್ಲಾ ಮಂಜುಗಡ್ಡೆಗಳು ಅಷ್ಟುದೂರ ಕ್ರಮಿಸುವುದಿಲ್ಲ. ಸುಮಾರು 60% ರಷ್ಟು ಮಂಜು ಗಡ್ಡೆಗಳು ಹೆಚ್ಚೆಂದರೆ 100ಕಿಮಿ ಚಲಿಸುವುವು. ಆದರೆ ಉಳಿದವಲ್ಲಿ ಹೆಚ್ಚು ಭಾಗ ಸಾವಿರಾರು ಕಿಮೀ ದೂರ ಕ್ರಮಿಸುತ್ತವೆ . ಒಂದು ಮಂಜುಗಡ್ಡೆ ರಷ್ಯಾದಿಂದ ಕ್ಯಾನಡಗೆ ಬರಲು 6-7 ವರ್ಷಗಳು ಬೇಕಿದ್ದವು, ಆದರೆ ಈಗ ಈ ಹೊಸ ಮಂಜು ಗಡ್ಡೆಗಳಿಗೆ 4-5 ವರ್ಷಗಳು ಸಾಕು. ಈ ಎರಡು ವರ್ಷದ ಅಂತರದಲ್ಲಿ ವಾತಾವರಣದ ಹಲವು ಬದಲಾವಣೆಗಳ ಕಾರಣವಾಗಿದೆ ಎಂಬುದು ಒಮ್ಮೆ ಊಹಿಸಿಕೊಳ್ಳಿ.

ಇದು ನಾವು ಮಾಡುತ್ತಿರೋ ಎಷ್ಟೋ ದುಷ್ಕೃತ್ಯಗಳಲ್ಲಿನ ಪರಿಣಾಮದ ಚಿಕ್ಕ ಸೂಚನೆಯಷ್ಟೆ. ನಮ್ಮ ಜೀವನ ಶೈಲಿ ಹೀಗೆಯೇ ಮುಂದುವರಿದರೆ ಮುಂದೆ ನಮ್ಮ ನಿಸರ್ಗ ದೇವಿಯ ಅದ್ಭುತ ಸೃಷ್ಟಿಯ ನೋಡುವುದು ಬೆರಳೆಣಿಕೆಯ ಪೀಳಿಗೆಗಳಷ್ಟೆ!!.

ಮೂಲ ಲೇಖನ ಮತ್ತು ಚಿತ್ರಗಳು: sciencenewsforstudents.org






- ಜೈಕುಮಾರ .ಆರ್



# ಚಿಗುರಿದ ಸೊಬಗು

ಸುಡುವ ಬೇಸಿಗೆಯಲಿ ಒಣಗಿದ ಮರಗಳು
ಬರುಡಾದವು ಉದುರಿಸಿ ತಮ್ಮ ಎಲೆಗಳನ್ನು
ಕ್ರಮೇಣ ಕ್ಷೀಣಿಸುತಾ ಬಂದವು ಸುಡುವ ಕಿರಣಗಳು
ಮೆಲ್ಲಗೆ ಉದುರಲಾರಂಬಿಸಿತು ಮಳೆ ಹನಿಗಳು.

ಈಗ ಹಸಿರು ಬಟ್ಟೆಯನ್ನು ಧರಿಸಲಾರಂಬಿಸಿತು ಮರಗಿಡಗಳು
ಮೆಲ್ಲಗೆ ಚಿಗುರಿಸಲಾರಂಬಿಸಿತು ಎಲೆಗಳನ್ನು
ನೆಲೆ ಸಿಕ್ಕ ಸಂತೋಷದಲಿ ಇದ್ದವು ಅದರವಲಂಬಿತ ಜೀವಿಗಳು
ತಮ್ಮ ಹೊಸ ಜೀವನವನ್ನು ಆರಂಬಿಸಿದವು ಕಟ್ಟಿ ಗೂಡನ್ನು.

ದೂರದಿಂದ ಹಾರಿ ಬರುತ್ತಿದ್ದ ಪಕ್ಷಿಗಳು
ಕಂಡವು ಹೊಸದಾಗಿ ಚಿಗುರಿದ ಮರಗಳನು
ಪಕ್ಷಿಯ ಸಪ್ಪಳ ಕೇಳಿ ಎಚ್ಚೆತ್ತುಕೊಂಡ ಕೀಟಗಳು
ಅಡಗಿ ಕೊತವು ಹುಡುಕಿ ಮರದ ಪೊಟರೆಗಳನ್ನು.

ಹಚ್ಚ ಹಸಿರಾಗಿ ಬೆಳೆದು ನಿಂತ ಮರಗಳು
ಬಿಟ್ಟವು ಕೆಲ ಸುಂದರ ಹೂವುಗಳನ್ನು
ಹೂಗಳುದುರಿ ಬಂದವು ಕೆಲ ಸಿಹಿಯಾದ ಹಣ್ಣುಗಳು
ಪಕ್ಷಿಗಳು ಹಣ್ಣುತಿಂದು ಪಸರಿಸಿದವು ಬೀಜಗಳನ್ನು.

ಬೀಜಗಳು ಒಡೆಯಲಾರಂಬಿಸಿತು ಮೊಳಕೆಗಳನ್ನು
ಮೊಳಕೆಯು ಗಿಡವಾಗಿ ಬೆಳೆದು
ತೋರಲಾರಂಭಿಸಿತು ತನ್ನ ಸೊಬಗನ್ನು.

- ಧನರಾಜ್ .ಎಂ



# ಪ್ರಕೃತಿ ಬಿಂಬ



ಹೇ... ಯಾರಿದು!, ನಾನು ಮೀನನ್ನ ಫೋಕಸ್ ಮಾಡ್ಕೋಣ ಅಂತ ಕೂತಿದ್ರೆ,
ಇವ್ರು ನನ್ನನ್ನ ಫೋಕಸ್ ಮಾಡ್ತಿದ್ದಾರಲ್ಲ. . !



ಮಲೆನಾಡಿನ ಮರಗಳ ನಡುವೆ ನಲಿದಾಡುತ್ತಿರುವ ಗಜಹಿಂಡು.



ಈ ನಮ್ಮ ಪಕ್ಷಿಮಫಟ್ಟಗಳು ನಾಶ ಆಗ್ತಿರೋದ್ ಅಲ್ಲದೆ,
ಈ ನಮ್ಮ ಪ್ರಪಂಚ ಕೂಡಾ ತುಂಬಾ ಚಿಕ್ಕದಾಗ್ತಿದೆ.



ಮುಂದಿನ ಹೆಜ್ಜೆ . . ?

– ಕಾರ್ತಿಕ್ .ಎ .ಕೆ